## ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 26(108)

ಸದಸ್ಯರ ಹೆಸರು : ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 13-12-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರವು ಅನುದಾನ ನೀಡುತ್ತಾ ಬಂದಿದ್ದು, 1986 ರಿಂದ ಅನುದಾನವನ್ನು ಸ್ಥಗಿತಗೊಳಿಸಿ ನಂತರ 2006ರಲ್ಲಿ ಹಾಗೂ ಬಂದ ಸರ್ಕಾರ 2008ರಲ್ಲಿದ್ದ ಸರ್ಕಾರ 1993 ರಿಂದ 1995ರವರೆಗೆ ಕನ್ನಡ ಮಾಧ್ಯಮದ ಶಾಲಾ ಮತ್ತು ಕಾಲೇಜುಗಳಿಗೆ ಅನುದಾನವನ್ನು ನೀಡಿರುವುದು ನಿಜವಲ್ಲವೇ; | ದಿನಾಂಕ: 01.06.1987 ರಿಂದ 1994-95 ರವರೆಗೆ ಪ್ರಾರಂಭವಾಗಿ ನಿರಂತರವಾಗಿ ನಡೆಯುತ್ತಿರುವ ಕನ್ನಡ ಮಾಧ್ಯಮದ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸಲು ಇಚ್ಚಿಸುವ ಆಡಳಿತ ಮಂಡಳಿಗಳು ಸಲ್ಲಿಸುವ ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿ ಕಾಲಕಾಲಕ್ಕೆ ಅನುದಾನಕ್ಕೆ ಒಳಪಡಿಸಲಾಗುತ್ತಿದೆ.<br>ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಪದವಿ ಪೂರ್ವ ಕಾಲೇಜುಗಳನ್ನು ಮಂಜೂರು ಮಾಡುವಾಗ ಮಾಧ್ಯಮವಾರು ಕಾಲೇಜುಗಳನ್ನು ಮಂಜೂರು ಮಾಡುವುದಿಲ್ಲ. |
| ಆ. | 2008 ರಿಂದ ಅಧಿಕಾರಕ್ಕೆ ಬಂದ ಸರ್ಕಾರಗಳು 1995ರ ನಂತರ ಪ್ರಾರಂಭವಾದ ಅನುದಾನರಹಿತ ಕನ್ನಡ ಮಾಧ್ಯಮ ಶಾಲಾ ಮತ್ತು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸದಿರುವುದು ಕನ್ನಡ ಭಾಷೆಗೆ ಸರ್ಕಾರವು ಮಾಡಿರುವುದು ಅಪಮಾನವಲ್ಲವೆ; | 1995ರ ನಂತರ ಆರಂಭವಾದ ಅನುದಾನ ರಹಿತ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಬಂಧ ಹಿಂದಿನ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ, ಮಾನ್ಯ ವಿಧಾನ ಪರಿಷತ್ ಸದಸ್ಯರು ಹಾಗೂ ಹಾಲಿ ಸಭಾಪತಿ ರವರ ಸಮ್ಮುಖದಲ್ಲಿ ಏರ್ಪಡಿಸಲಾಗಿದ್ದ ಸಭೆಯಲ್ಲಿ, ಸದರಿ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಬಂಧ 1995 ರಿಂದ 2019 ರವರೆಗೆ ಪ್ರತಿ 05 ವರ್ಷದ ಬ್ಲಾಕ್ ಅವಧಿಯಲ್ಲಿ ಪ್ರಾರಂಭಿಸಲಾಗಿರುವ ಶಾಲಾ ಕಾಲೇಜುಗಳಲ್ಲಿ ಎಷ್ಟು ಶಿಕ್ಷಕರು / ಉಪನ್ಯಾಸಕರುಗಳು /ಬೋಧಕೇತರುಗಳು ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಇವರುಗಳನ್ನು ಅನುದಾನಕ್ಕೆ ಒಳಪಡಿಸಿದ್ದಲ್ಲಿ ವಾರ್ಷಿಕವಾಗಿ ತಗಲುವ ಅಂದಾಜು ವೆಚ್ಚದ ಮಾಹಿತಿಯನ್ನು ಆಯುಕ್ತಾಲಯಗಳು ಮತ್ತು ಪದವಿ ಪೂರ್ವ ನಿರ್ದೇಶನಾಲಯದಿಂದ ಪಡೆದು ಪರಿಶೀಲಿಸಲಾಗುತ್ತಿದೆ. |

| | | |
|---|---|---|
| ಇ. | ರಾಜ್ಯದ ಅನುದಾನರಹಿತ ಕನ್ನಡ ಶಾಲೆ ಹಾಗೂ ಕನ್ನಡ ಭಾಷೆ ಉಳಿವಿಗೆ ಸರ್ಕಾರವು ಒತ್ತು ನೀಡುವುದೇ ? | ರಾಜ್ಯದಲ್ಲಿ ಅನುದಾನರಹಿತ ಶಾಲೆಗಳಲ್ಲಿ ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಬೋಧಿಸುವಂತೆ ಅಧಿನಿಯಮವನ್ನು 2015ರಲ್ಲಿ ಜಾರಿಗೆ ತಂದಿದ್ದು ಹಾಗೂ 2017ರಲ್ಲಿ ಕನ್ನಡ ಭಾಷಾ ಕಲಿಕಾ ನಿಯಮಗಳನ್ನು ಜಾರಿಗೆ ತಂದು ರಾಜ್ಯದ ಎಲ್ಲಾ ಅನುದಾನರಹಿತ ಶಾಲೆಗಳಲ್ಲಿ ಕನ್ನಡ ಭಾಷೆ ಕಲಿಕೆಯನ್ನು ಕಡ್ಡಾಯವಾಗಿ ಪಾಲಿಸಲು ನಿಬಂಧನೆ ಜಾರಿಗೊಳಿಸಿ ಕನ್ನಡ ಭಾಷೆ ಉಳಿವಿಗೆ ಹೆಚ್ಚಿನ ಒತ್ತು ನೀಡಲಾಗಿದೆ. |

**ಇಪಿ 256 ಪಿಎಂಸಿ 2021**

**[ಬಿ.ಸಿ.ನಾಗೇಶ್]**

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**

**ಸಕಾಲ ಸಚಿವರು.**